# ತರಗತಿಗಳಲ್ಲಿ ವಿಂಗಡನೆಯನ್ನು ತಡೆಯುವುದು

ನವೀನ್ ಕುಮಾರ್ ಪಾಸ್ವಾನ್

ನನ್ನ 16 ವರ್ಷಗಳ ಶಿಕ್ಷಣದುದ್ದಕ್ಕೂ ಒಂದನೇ ತರಗತಿಯಿಂದ ಪದವಿ ಪೂರ್ವ ಶಿಕ್ಷಣದವರೆಗೆ ನಾನು ತರಗತಿಯಲ್ಲಿ ಹುಡುಗಿಯರೊಂದಿಗೆ ಮಾತನಾಡುತ್ತಿರಲಿಲ್ಲ. ಕೆಲವು ಹುಡುಗರು ಹುಡುಗಿಯರೊಂದಿಗೆ ಹಿಂಜರಿಕೆಯಿಲ್ಲದೆ ಮಾತನಾಡುತ್ತಿದ್ದರು. ಆದರೆ ನನಗೆ ಹುಡುಗಿಯರೊಡನೆ ಸಂವಹನ ನಡೆಸಲು ಕೆಲವು ಮಾನಸಿಕ ಅಡೆತಡೆಗಳಿದ್ದವು. ಅದಕ್ಕಿಂತಲೂ ಹೆಚ್ಚಾಗಿ ಹುಡುಗಿಯರೊಂದಿಗೆ ಮಾತನಾಡದ ಹುಡುಗರ ಗುಂಪನ್ನು ನಾನು ಮುನ್ನಡೆಸುತ್ತಿದ್ದೆ. ಈಗ ಇಷ್ಟು ವರ್ಷಗಳ ಬಳಿಕ ಹುಡುಗಿಯರೊಂದಿಗೆ ಮಾತನಾಡುವುದರಿಂದ ನನ್ನನ್ನು ತಡೆಯುತ್ತಿದ್ದುದು ಯಾವುದೆಂದು ನಾನು ಆಶ್ಚರ್ಯಪಡುತ್ತೇನೆ. ನನ್ನ ಗೆಳೆಯರು ಮಾತನಾಡದಂತೆ ನಾನೇಕೆ ತಡೆಯುತ್ತಿದ್ದೆ? ಇದಕ್ಕೂ ನನ್ನ ಪೋಷಕರಿಗೂ ಅಥವಾ ನನ್ನ ಶಿಕ್ಷಕರಿಗೂ ಏನಾದರೂ ಸಂಬಂಧವಿದೆಯೇ? ಇದು ನನ್ನ ಮೇಲೆ ಸಿನಿಮಾಗಳು ಬೀರಿದ ಪ್ರಭಾವವಾಗಿತ್ತೇ? ಈ ಲೇಖನದಲ್ಲಿ ಒಬ್ಬ ವಿದ್ಯಾರ್ಥಿಯಾಗಿ ನನ್ನ ಮೇಲೆ ಪರಿಣಾಮ ಬೀರಿದ ಹಾಗೂ ಇಂದಿನ ಮಕ್ಕಳ ಮೇಲೆ ಈಗಲೂ ಪ್ರಭಾವ ಬೀರುತ್ತಿರಬಹುದಾದ ಕೆಲವು ಅನುಭವಗಳನ್ನು ನಾನು ಹಂಚಿಕೊಳ್ಳುತ್ತಿದ್ದೇನೆ. ಈ ಲೇಖನವು ತರಗತಿಯಲ್ಲಿನ ಲಿಂಗ ವಿಂಗಡನೆಯು ವಿದ್ಯಾರ್ಥಿಗಳ ಕಲಿಕೆಯ ಮೇಲೆ ಬೀರುವ ಸಾಮಾನ್ಯ ಪ್ರಭಾವವನ್ನು ಮತ್ತು ನಿರ್ದಿಷ್ಟವಾಗಿ ವಿದ್ಯಾರ್ಥಿಗಳ ಸಮಗ್ರ ಕಲಿಕೆಯ ಮೇಲೆ ಬೀರುವ ಪ್ರಭಾವವನ್ನು ಎತ್ತಿ ತೋರಿಸುತ್ತದೆ. ಅಂತಿಮವಾಗಿ, ತರಗತಿಯಲ್ಲಿ ಇರುವ ಪ್ರತ್ಯೇಕತೆಯನ್ನು ಒಂದಾಗಿಸುವ ಮಾರ್ಗಗಳನ್ನು ಸೂಚಿಸುತ್ತದೆ.

ಶಾಲೆಯು ನಮಗೆ ಕುಟುಂಬಕ್ಕೆ ಹೊರತಾದ, ಸಾಮಾಜಿಕವಾಗಿ ತೆರೆದುಕೊಳ್ಳುವ ಮೊದಲ ಅವಕಾಶವನ್ನು ಒದಗಿಸುತ್ತದೆ. ನನ್ನ ಶಾಲೆಯಲ್ಲಿ ಹುಡುಗರು ಮತ್ತು ಹುಡುಗಿಯರಿಗೆ ಪ್ರತ್ಯೇಕವಾದ ಆಸನದ ವ್ಯವಸ್ಥೆಯಿತ್ತು. ನಾನು ಹುಡುಗಿಯರೊಂದಿಗೆ ಮಾತನಾಡುತ್ತಿರಲಿಲ್ಲ ಮತ್ತು ನನ್ನ ಗುಂಪಿನಲ್ಲಿಲ್ಲದ ಹುಡುಗರೊಂದಿಗೆ ಕೂಡ ಮಾತನಾಡುತ್ತಿರಲಿಲ್ಲ. ಹುಡುಗರಿಗೆ ಹೋಲಿಸಿದರೆ ಹುಡುಗಿಯರು ಬುದ್ಧಿಮಟ್ಟ ಕಡಿಮೆ ಎಂದು ನಾನು ಭಾವಿಸಿದ್ದೆ. ಮತ್ತು ಅವರ ಬಗ್ಗೆ ಯಾವುದೇ ಗೌರವ ನನಗಿರಲಿಲ್ಲ. ಆದರೂ ನನ್ನ ಸಹೋದರಿ ಮತ್ತು ನನ್ನ ಕೆಲವು ಮಹಿಳಾ ಶಿಕ್ಷಕರನ್ನು ಇದಕ್ಕೆ ಅಪವಾದವೆಂದು ನಾನು ಭಾವಿಸಿದ್ದೆ. ಕೇವಲ ಹುಡುಗರ ಗುಂಪಿನ ಭಾಗವಾಗಿರುವುದರಿಂದ, ನನ್ನದು ಸೀಮಿತ ಬೆರೆಯುವಿಕೆಯಾದ್ದರಿಂದ ನನ್ನದು ಸೀಮಿತ ಕಲಿಕೆ. ಈ ಪ್ರತ್ಯೇಕತೆಯು ನಾನು ಪದವಿ ಮುಗಿಸುವವರೆಗೂ, ನನ್ನ ಆಯ್ಕೆಗಳ ಮೇಲೆ ಮತ್ತು ನನ್ನನ್ನು ನಾನು ನೋಡುವ ದೃಷ್ಟಿಕೋನದ ಮೇಲೆ ಪ್ರಭಾವ ಬೀರಿತು.

## ತಪ್ಪು ಸ್ವ-ಕಲ್ಪನೆ

ನಾನು ಆದರ್ಶ ವ್ಯಕ್ತಿ ಎಂಬ ಸ್ವಲ್ಪನೆಯನ್ನು (self-image) ಬೆಳೆಸಿಕೊಂಡಿದ್ದೆ. ಈ ಸ್ವ-ಕಲ್ಪನೆ ಉಳಿಸಿಕೊಳ್ಳುವ ಬಯಕೆಯು ನನ್ನೆಲ್ಲ ಕ್ರಿಯೆಗಳನ್ನು ನಿಯಂತ್ರಿಸುತ್ತಿತ್ತು. ನನ್ನ ಪ್ರಕಾರ ಆದರ್ಶ ವ್ಯಕ್ತಿಯಾಗಿರುವುದೆಂದರೆ ತತ್ವಾದರ್ಶಗಳ ವ್ಯಕ್ತಿಯಾಗಿರುವುದು, ಯಾರಿಗೂ ನನ್ನ ವರ್ತನೆಗಳನ್ನು ಪ್ರಶ್ನಿಸುವ ಅವಕಾಶವನ್ನು ನೀಡದಿರುವುದು. ಹುಡುಗಿಯರೊಂದಿಗೆ ಮಾತನಾಡದ ಹುಡುಗ ಎಂಬ ಈ ಸಂಭಾವ್ಯ ಪರಿಶುದ್ಧ ಚಿತ್ರವನ್ನು ನಾನು ಯಶಸ್ವಿಯಾಗಿ ನನ್ನ ಗೆಳೆಯರ ಪೋಷಕರ ದೃಷ್ಟಿಯಲ್ಲಿ ಕಟ್ಟಿಕೊಂಡಿದ್ದೆ. ಅವರಿಗೆ ನನ್ನ ಮೇಲೆ ನಂಬಿಕೆ ಇತ್ತು ಹಾಗೂ ಅವರು ನಾನು ಒಳಗೊಂಡಿರುವಂತಹ ಯಾವುದನ್ನಾದರೂ ಮಾಡಲು ನನ್ನ ಗೆಳೆಯರಿಗೆ ಸುಲಭವಾಗಿ ಅನುಮತಿ ನೀಡುತ್ತಿದ್ದರು. ಶಾಲಾ ಆಡಳಿತಕ್ಕೂ ನನ್ನ ಮೇಲೆ ಇದೇ ರೀತಿಯ ನಂಬಿಕೆ ಇತ್ತು. ಅವರು ಯಾರಾದರೂ ಹೊಸ ಶಿಕ್ಷಕರ ಬಗ್ಗೆ ತಿಳಿಯಲು ಅಥವಾ ನನ್ನ ಸಹಪಾಠಿಗಳ ಪೈಕಿ ತುಂಟತನದಲ್ಲಿ, ಕಿಡಿಗೇಡಿತನದಲ್ಲಿ ಭಾಗಿಯಾದವರ ಹೆಸರುಗಳನ್ನು ತಿಳಿಯಲು ನನ್ನನ್ನು ಸಂಪರ್ಕಿಸುತ್ತಿದ್ದರು. ಈ ಬಗ್ಗೆ ನಮ್ಮ ನಡುವೆ ಜಗಳವಾದರೂ ನಾನು ನನ್ನ ಈ ವ್ಯಕ್ತಿತ್ವವನ್ನು ಉಳಿಸಿಕೊಳ್ಳಲು ಅವರಿಗೆ ನನ್ನ ಗೆಳೆಯರ ಹೆಸರುಗಳನ್ನು ತಿಳಿಸುತ್ತಿದ್ದೆ. ನನಗೆ ಇದೊಂದು ಸಂದಿಗ್ಧ ಪರಿಸ್ಥಿತಿಯಾಗಿತ್ತು. ಈ ಸ್ವ-ವ್ಯಕ್ತಿತ್ವವನ್ನು ಉಳಿಸಿಕೊಳ್ಳಲು ನಾನು ನನ್ನನ್ನು ಹಾಗೂ ನನ್ನ ಗೆಳೆಯರನ್ನು ಹುಡುಗಿಯರೊಂದಿಗೆ ಮಾತನಾಡದಂತೆ ತಡೆಯುತ್ತಿದ್ದೆ. ಅವರು ಹುಡುಗಿಯರೊಂದಿಗೆ ಮಾತನಾಡಿದರೆ ನಾನು ಅವರೊಂದಿಗೆ ಮಾತನಾಡದೆ ಇರುವ ಮೂಲಕ ಅವರಿಗೆ ಒತ್ತಡ ಹಾಕುತ್ತಿದ್ದೆ. ನಾನು ಈ ಇಮೇಜ್ ಉಳಿಸಿಕೊಳ್ಳಲಿಕ್ಕಾಗಿ ಹುಡುಗಿಯರೊಂದಿಗೆ ತೀರ ಕಠೋರವಾಗಿ ವರ್ತಿಸುತ್ತಿದ್ದೆ. ನಾವು ತರಗತಿಯಲ್ಲಿ ಗುಂಪಾಗಿ ಹುಡುಗಿಯರ ಬಗ್ಗೆ ಕಮೆಂಟ್ ಮಾಡುವ/ಟೀಕಿಸುವ ಮೂಲಕ ಅವರನ್ನು ಬೆದರಿಸುತ್ತಿದ್ದೆವು. ತರಗತಿಯ ಒಳಗೆ ಹುಡುಗರ ಹಾಗೂ ಹುಡುಗಿಯರ ನಡುವೆ ಪ್ರತ್ಯೇಕತೆ ಇದ್ದದ್ದು ಮಾತ್ರವಲ್ಲ, ಪರಸ್ಪರ ಹುಡುಗರ ನಡುವೆಯೂ ಎರಡು ಪ್ರತ್ಯೇಕ ಗುಂಪುಗಳಾಗಿ ತರಗತಿಯು ವಿಂಗಡಿಸಲ್ಪಟ್ಟಿತ್ತು.

ಶಾಲಾ ಆಡಳಿತವಾಗಲಿ ನನ್ನ ಪೋಷಕರಾಗಲಿ ಉದ್ದೇಶಪೂರ್ವಕವಾಗಿ ನನ್ನ ಈ ಮನೋಭಾವವನ್ನು ಪ್ರೋತ್ಸಾಹಿಸಿರಲಿಲ್ಲ. ಅದೇ ರೀತಿ ಕುಟುಂಬವಾಗಲಿ ಶಿಕ್ಷಕರಾಗಲಿ ಎಂದಾದರೂ ಈ ಬಗ್ಗೆ ನನ್ನೊಂದಿಗೆ ಮಾತನಾಡಿರಲಿಲ್ಲ ಎಂಬುದೂ ಸತ್ಯವಾಗಿದೆ. ನನ್ನ 21ನೇ ವಯಸ್ಸಿನಲ್ಲಿ ನಾನು ಎನ್‌ಜಿಒ ಒಂದರಲ್ಲಿ ಕೆಲಸಕ್ಕೆ ಸೇರಿಕೊಂಡೆ. ಅಲ್ಲಿ ಲಿಂಗತ್ವ

ತರಬೇತಿಯನ್ನು ಪಡೆದೆ. ಈ ತರಬೇತಿಯು ನನ್ನೊಳಗಿದ್ದ ಪಕ್ಷಪಾತಗಳ ಬಗ್ಗೆ ಅರಿವು ಮೂಡಿಸಿತು. ವಿದ್ಯಾರ್ಥಿ ಜೀವನದುದ್ದಕ್ಕೂ ಮಹಿಳೆಯ ವಿರುದ್ಧದ ಸಿದ್ಧಮಾದರಿಗಳು (stereotypes) ಹಾಗೂ ಪೂರ್ವಾಗ್ರಹಗಳೇ ನಾನು ಹಾಗೆ ವರ್ತಿಸಲು ಕಾರಣವಾಗಿದ್ದವು ಎಂಬುದು ನನಗೆ ಅರಿವಾಯಿತು.

ನಾನು 11 ವರ್ಷದವನಾಗಿದ್ದಾಗ ನನ್ನ ಅಕ್ಕ ಜೀನ್ಸ್ ತೊಡುವುದಕ್ಕೆ ಆಕ್ಷೇಪ ವ್ಯಕ್ತಪಡಿಸಿದ ಘಟನೆಯು ನನಗೆ ನೆನಪಾಯಿತು. ಇಷ್ಟೊಂದು ವರ್ಷಗಳ ಕಾಲ ನಾನೆಷ್ಟು ಸಂವೇದನಾರಹಿತನಾಗಿದ್ದೆ ಎಂಬುದನ್ನು ನಾನು ತಿಳಿದುಕೊಂಡೆನು.

## ವಿಂಗಡನೆಯನ್ನು ತಡೆಗಟ್ಟುವುದು

ತರಗತಿಗಳಲ್ಲಿ ಬದಲಾವಣೆ ತರುವುದರಲ್ಲಿ ಶಿಕ್ಷಕರ ಪಾತ್ರ ಮಹತ್ವದ್ದು. ಶಾಲೆಯೊಳಗಿನ ಪ್ರತ್ಯೇಕತೆಯನ್ನು ತೊಡೆದು ಹಾಕಲು ಅವರು ಕ್ರಮಗಳನ್ನು ತೆಗೆದುಕೊಳ್ಳಬಹುದು ಹಾಗೂ ತರಗತಿಯನ್ನು ಎಲ್ಲರಿಗೂ ಸಮಗ್ರ ಕಲಿಕೆಯ ಸ್ಥಳವಾಗಿ (holistic learning space) ಅಭಿವೃದ್ಧಿಪಡಿಸಬಹುದು. ನನ್ನ ಶಾಲೆಯ ಶಿಕ್ಷಕರು ನನ್ನ ತರಗತಿಯಲ್ಲಿ ಪ್ರತ್ಯೇಕತೆಯನ್ನು ಕಡಿಮೆ ಮಾಡಲು ಏನು ಮಾಡಬಹುದಿತ್ತು ಎಂದು ಯೋಚಿಸಿದರೆ ನನಗೆ ಈಗ ಅಚ್ಚರಿಯಾಗುತ್ತಿದೆ. ತರಗತಿಗಳಲ್ಲಿ ವಿಂಗಡನೆಯನ್ನು ಪರಿಹರಿಸಲು ಶಿಕ್ಷಕರು ತೆಗೆದುಕೊಳ್ಳಬಹುದಾದ ಕೆಲವು ಕ್ರಮಗಳು ಈ ಕೆಳಗಿನಂತಿವೆ.

## ಭಾವನೆಗಳ ಬಗ್ಗೆ ಮಾತನಾಡಲು ಉತ್ತೇಜಿಸುವುದು

ಶಿಕ್ಷಕರು ಶಾಲೆಯಲ್ಲಿ ಭಾವನಾತ್ಮಕ ವಾತಾವರಣವನ್ನು ಸುಗಮಗೊಳಿಸಬಹುದು. ಇಲ್ಲಿ ಪ್ರೀತಿ, ದ್ವೇಷ, ಅಸೂಯೆ ಮತ್ತು ಭಯದಂತಹ ಭಾವನೆಗಳ ಬಗ್ಗೆ ಮಾತನಾಡಲು ಮಕ್ಕಳನ್ನು ಪ್ರೋತ್ಸಾಹಿಸಲಾಗುತ್ತದೆ ಮತ್ತು ಸಹಾಯ ಮಾಡಲಾಗುತ್ತದೆ. ಇದು ಮಕ್ಕಳು ತಮ್ಮ ಭಯ ಮತ್ತು ಆತಂಕವನ್ನು ಪರಸ್ಪರ ಹಂಚಿಕೊಳ್ಳಲು ಮತ್ತು ಅವುಗಳಿಂದ ಹೊರಬರಲು ಪರಸ್ಪರ ಸಹಾಯ ಮಾಡುವ ಅವಕಾಶವನ್ನು ಸೃಷ್ಟಿಸುತ್ತದೆ.

## ಮಿಶ್ರ ಗುಂಪುಗಳನ್ನು ರಚಿಸುವುದು

ವಿವಿಧ ಗುಂಪುಗಳಾಗಿ ವಿಂಗಡಿಸಲ್ಪಟ್ಟ ಮಕ್ಕಳನ್ನು ಸೇರಿಸಿ ಸಣ್ಣ ಉಪಗುಂಪುಗಳನ್ನು ರಚಿಸಿ ಶಿಕ್ಷಕರು ಅವರಿಗೆ ಗುಂಪು ಕೆಲಸ (ಗ್ರೂಪ್ ವರ್ಕ್) ಕೊಡಬಹುದು. ಇದು ವಿವಿಧ ಪ್ರತ್ಯೇಕ ಗುಂಪುಗಳ ಮಕ್ಕಳನ್ನು ಪರಸ್ಪರ ಸಂವಹನ ನಡೆಸುವಂತೆ ಮಾಡುತ್ತದೆ.

## ಗುಂಪು ಯೋಜನಾ ಕಾರ್ಯಗಳನ್ನು ನೀಡುವುದು

ವಿದ್ಯಾರ್ಥಿಗಳು ಜೊತೆಯಾಗಿ ಕೆಲಸ ಮಾಡಲು ಕಲಿಯುವಂತಹ ಸಾಮಾನ್ಯ ಗುರಿಗಳನ್ನು ಗೊತ್ತುಪಡಿಸಿ ಹಾಗೂ ಒಗ್ಗಟ್ಟಿನ ಮತ್ತು ಇತರ ವಿದ್ಯಾರ್ಥಿಗಳಿಗೆ ಗೌರವದ ಭಾವವನ್ನು ಬೆಳೆಸಿಕೊಳ್ಳುವಂತಹ ಪರಸ್ಪರ ಒಟ್ಟಾಗಿ ಮಾಡುವಂತಹ ಚಟುವಟಿಕೆಗಳನ್ನು (collaborative task) ಉದ್ದೇಶ–ಪೂರ್ವಕವಾಗಿ ಕೊಡುವ ಮೂಲಕ ಶಿಕ್ಷಕರು ವಿದ್ಯಾರ್ಥಿಗಳ ನಡುವಿನ ಸಂವಹನವನ್ನು ಉತ್ತೇಜಿಸಬಹುದು. ಶಿಕ್ಷಕರು ಇದನ್ನು ತಂಡಗಳನ್ನು ರಚಿಸುವ ಮೂಲಕ ಮಾಡಬಹುದು. ಇದರಿಂದಾಗಿ ವಿಂಗಡಿಸಲ್ಪಟ್ಟ ಎರಡು ಗುಂಪುಗಳ ವಿದ್ಯಾರ್ಥಿಗಳು ಪರಸ್ಪರ ಸಂವಹನ ನಡೆಸಲು ಹೆಚ್ಚು ಸಮಯ ಸಿಗುತ್ತದೆ ಮತ್ತು ಜೊತೆಯಾಗಿ ಕೆಲಸ ಮಾಡುವಾಗ ಪರಸ್ಪರರನ್ನು ಅರ್ಥ ಮಾಡಿಕೊಳ್ಳಲು ಹೆಚ್ಚು ಕಾಲಾವಕಾಶ ಸಿಗುತ್ತದೆ.

## ಸಮಾನ ತಿಳಿವಳಿಕೆಯ ನಿರ್ಮಾಣ

ತರಗತಿಯೊಳಗೆ ವಿದ್ಯಾರ್ಥಿಗಳು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳಲು ಅವಕಾಶ ನೀಡುವ ಮೂಲಕ ವಿಭಿನ್ನ ಅಭಿಪ್ರಾಯಗಳನ್ನು ಆಲಿಸಲು ಅನುವಾಗುವಂತಹ ಮುಕ್ತ ವಾತಾವರಣವನ್ನು ಶಿಕ್ಷಕರು ನಿರ್ಮಿಸಬೇಕು. ಆ ನಿಟ್ಟಿನಲ್ಲಿ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ಮೂಲಕ ಶಿಕ್ಷಕರು ತಮ್ಮ ತರಗತಿಗಳಲ್ಲಿ ವಿಭಿನ್ನ ಅಭಿಪ್ರಾಯಗಳನ್ನು ಕೇಳುವ ಸಂಸ್ಕೃತಿಯನ್ನು, ಸಮಾನತೆಯನ್ನು ನಿರ್ಮಿಸಬಹುದು.

## ತರಗತಿಯೊಳಗೆ ಸಮತೋಲನ ಸಾಧಿಸುವುದು

ತರಗತಿಯಲ್ಲಿರುವ ಗುಂಪು ಕ್ರಿಯಾಶೀಲತೆಯನ್ನು (group dynamics) ಶಿಕ್ಷಕರು ಸುಲಭವಾಗಿ ಗ್ರಹಿಸಬಹುದು. ಅವರು ಇದನ್ನು ದಮನಿಸುವ ಹಾಗೂ ದಮನಕ್ಕೊಳಪಡುವ ಗುಂಪುಗಳ ನಡುವಿನ ಶಕ್ತಿಯನ್ನು ಸಮತೋಲನದಲ್ಲಿಡಲು ಬಳಸಬಹುದು. ದಮನಕ್ಕೊಳಗಾಗುವ ಗುಂಪಿನ ಮಕ್ಕಳ ಅಭಿಪ್ರಾಯಗಳನ್ನು ಉದ್ದೇಶಪೂರ್ವಕವಾಗಿ ಕೇಳುವ ಹಾಗೂ ಅವರ ವಾದಗಳನ್ನು ಬೆಂಬಲಿಸುವ ಮೂಲಕ ಅವರ ಭಾಗವಹಿಸುವಿಕೆಯನ್ನು ಸುಗಮಗೊಳಿಸಬಹುದು.

ತರಗತಿಯಲ್ಲಿ ವಿದ್ಯಾರ್ಥಿಗಳಲ್ಲಿ ಸಂಲಗ್ನತೆಯನ್ನು/ಒಗ್ಗಟ್ಟನ್ನು ಮೂಡಿಸಲು ಈ ಕ್ರಮಗಳನ್ನು ಅನುಸರಿಸಬೇಕೆಂದು ಪ್ರಸಿದ್ಧ ಮನೋ ವಿಶ್ಲೇಷಕರಾದ ವಿಲ್ಫ್ರೆಡ್ ಬ್ರಿಯಾನ್ ಸಲಹೆ ನೀಡುತ್ತಾರೆ:

## ಸಾಮಾನ್ಯ ಗುರಿಗಳನ್ನು ರೂಪಿಸುವುದು

ಇಡೀ ತರಗತಿಯ ಮಕ್ಕಳೆಲ್ಲ ಜೊತೆ ಸೇರಿ ನಿರ್ವಹಿಸುವಂತಹ ಸಾಮಾನ್ಯ ಗುರಿಗಳನ್ನು ನಿರೂಪಿಸುವುದರಿಂದ ಮಕ್ಕಳಿಗೆ ತರಗತಿಯ ಸಾಮೂಹಿಕ ಗುರಿಗಳನ್ನು ಗುರುತಿಸಲು ಹಾಗೂ ಅದಕ್ಕಾಗಿ ಜೊತೆ ಸೇರಿ ಕೆಲಸ ಮಾಡಲು ಸಹಾಯಕವಾಗುವುದು.

## ತನ್ನನ್ನು ಇತರರಿಂದ ಪ್ರತ್ಯೇಕಿಸಿಕೊಳ್ಳುವುದು

ವ್ಯಕ್ತಿಗಳು ತಮ್ಮ ಸಾಮಾಜಿಕ ಹಾಗೂ ಮಾನಸಿಕ ಅನುಭವಗಳ ಆಧಾರದಲ್ಲಿ ವಿಭಿನ್ನರಾಗಿದ್ದಾರೆ ಎಂಬ ತಿಳುವಳಿಕೆ ಹಾಗೂ ಸ್ವೀಕಾರಾರ್ಹತೆಯನ್ನು ಶಿಕ್ಷಕರು ವಿದ್ಯಾರ್ಥಿಗಳಲ್ಲಿ ಬೆಳೆಸಬಹುದು. ಇದು ತನ್ನ ಹಾಗೂ ಇತರರ ಬಗ್ಗೆ ಉತ್ತಮ ತಿಳುವಳಿಕೆಯನ್ನು ಬೆಳೆಸಲು ನೆರವಾಗುವುದು. ವಿಭಿನ್ನ ಅಭಿಪ್ರಾಯಗಳನ್ನು ಹೊಂದಿರುವ ಜನರ ಬಗ್ಗೆ ಗೌರವವನ್ನು ಬೆಳೆಸಲು ಕೂಡ ಇದು ಸಹಾಯ ಮಾಡುತ್ತದೆ.

## ಇತರರೊಂದಿಗೆ ಸಹಜವಾಗಿರುವುದು

ವಿಭಿನ್ನ ದೃಷ್ಟಿಕೋನಗಳನ್ನು ಹೊಂದಿರುವ ಜನರನ್ನು ಸ್ವೀಕರಿಸಿಕೊಳ್ಳುವುದು ಒಂದು ಕಷ್ಟದ ಕೆಲಸವೇ ಆಗಿದೆ. ಏಕೆಂದರೆ ಅದಕ್ಕೆ ಒಂದು ವಿಷಯದ ಬಗ್ಗೆ ಒಬ್ಬರ ಸ್ವಂತ ಅಭಿಪ್ರಾಯವನ್ನು ಪ್ರಶ್ನಿಸಿಕೊಳ್ಳುವ ಕೌಶಲದ ಅಗತ್ಯವಿದೆ. ವಿದ್ಯಾರ್ಥಿಗಳು ಪರಸ್ಪರರ ಅಭಿಪ್ರಾಯಗಳನ್ನು ಸೌಜನ್ಯದಿಂದ ಆಲಿಸುವಂತೆ ಶಿಕ್ಷಕರು ಈ ಪ್ರಕ್ರಿಯೆಯನ್ನು ಸುಗಮಗೊಳಿಸಬಹುದು, ತರಗತಿಯ ಪ್ರತಿ ಸದಸ್ಯನ ಕೊಡುಗೆಯು ಮಹತ್ವದ್ದು ಎಂಬ ಅರಿವನ್ನು ಮಕ್ಕಳಲ್ಲಿ ಮೂಡಿಸಬೇಕು.

## ಭಿನ್ನಾಭಿಪ್ರಾಯಗಳನ್ನು ಸಹಿಸುವುದು

ಇತರ ಸದಸ್ಯರ ಭಿನ್ನಾಭಿಪ್ರಾಯಗಳನ್ನು ಸಹಿಸುವ ಹಾಗೂ ಅದನ್ನು ನಿಭಾಯಿಸುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಶಿಕ್ಷಕರು ವಿದ್ಯಾರ್ಥಿಗಳಿಗೆ ಸಹಾಯ ಮಾಡಬಹುದು. ವಿದ್ಯಾರ್ಥಿಗಳು ವಿಚಾರಗಳನ್ನು ವಿರೋಧಿಸಲು ಕಲಿಯುವರು; ವ್ಯಕ್ತಿಗಳನ್ನಲ್ಲ. ಸಮಸ್ಯೆಯನ್ನು ಹಲವು ದೃಷ್ಟಿಕೋನಗಳಿಂದ ನೋಡಲು ಈ ಸಾಮರ್ಥ್ಯವು ಅವರನ್ನು ಸಜ್ಜುಗೊಳಿಸುತ್ತದೆ.

## ಹಿಮ್ಮಾಹಿತಿ ನೀಡುವುದನ್ನು ಸುಗಮಗೊಳಿಸುವುದು

ಶಾಲಾ ಮನಶಾಸ್ತ್ರಜ್ಞರಾದ ಕ್ರೇಗ್ ಸ್ಟೀವನ್ಸ್ ಅವರು ಹಿಮ್ಮಾಹಿತಿ ನೀಡುವ ಪರಿಕಲ್ಪನೆಯನ್ನು ಶಿಫಾರಸು ಮಾಡುತ್ತಾರೆ. ಈ ಪ್ರಕ್ರಿಯೆಯಲ್ಲಿ ಮಕ್ಕಳನ್ನು ರಚನಾತ್ಮಕ ವಿಚಾರಗಳು ಭಾವನೆಗಳು ಹಾಗೂ ಟೀಕೆಗಳನ್ನು ವ್ಯಕ್ತಪಡಿಸಲು ಪ್ರೋತ್ಸಾಹಿಸಲಾಗುತ್ತದೆ.

ಪ್ರತಿಯೊಂದು ಮಗುವಿಗೂ ತನ್ನನ್ನು ತಾನು ವ್ಯಕ್ತಪಡಿಸಿಕೊಳ್ಳಲು ಅದರೊಂದಿಗೆ ನಿರಾಕರಿಸುವ ಅವಕಾಶವನ್ನು ನೀಡಲಾಗುತ್ತದೆ. ಇದು ಮಕ್ಕಳಿಗೆ ಸಂಘರ್ಷರಹಿತ ವಿಧಾನದಲ್ಲಿ ಪ್ರಶ್ನೆಗಳನ್ನು ಕೇಳಲು ಸಹಾಯ ಮಾಡುತ್ತದೆ. ಪರಿಣಾಮವಾಗಿ ಮಕ್ಕಳು ಮೌಖಿಕವಾಗಿ ಅಭಿವ್ಯಕ್ತಪಡಿಸುವವರಾಗುತ್ತಾರೆ. ಆಗ ಅವರು ಆಡುವ ಮಾತು, ಕೃತಿಗಳಿಗೆ ಹೆಚ್ಚು ಜವಾಬ್ದಾರಿದಾರರಾಗುತ್ತಾರೆ ಮತ್ತು ಇತರರ ಬಗ್ಗೆ ಹೆಚ್ಚು ಸಂವೇದನಾಶೀಲರಾಗುವರು.
ವಿಭಿನ್ನ ಲಿಂಗ ಮತ್ತು ಸಿದ್ಧಾಂತಗಳನ್ನು ಹೊಂದಿರುವ ಸಹಪಾಠಿಗಳೊಂದಿಗೆ ಸಂವಹನ ಮಾಡುವುದರಿಂದ ಪ್ರತಿಯೊಂದು ಮಗುವೂ ವಿಷಯಗಳನ್ನು ಒಂದೇ ದೃಷ್ಟಿಕೋನದಿಂದ ನೋಡುವ ಬದಲು ಸಮಗ್ರ ಚಿತ್ರಣವನ್ನು ಪಡೆಯಲು ಸಾಧ್ಯವಾಗುತ್ತದೆ. ವಿದ್ಯಾರ್ಥಿಗಳು ವ್ಯತ್ಯಾಸಗಳ ಮೌಲ್ಯಗಳನ್ನು ಹಾಗೂ ವಿಭಿನ್ನ ವಿಚಾರಗಳನ್ನು ಮತ್ತು ಆದ್ಯತೆಗಳ ವೈವಿಧ್ಯತೆಯನ್ನು ಕಲಿಯುವರು. ಶಾಲೆಯಲ್ಲಿ ಪರಸ್ಪರ ಸಂವಹನ ನಡೆಸುವ ಸಂಸ್ಕೃತಿಯನ್ನು ಉತ್ತೇಜಿಸುವುದರಿಂದ ಸಮಗ್ರ ಕಲಿಕೆ ಮತ್ತು ಬೆಳವಣಿಗೆಯ ಸ್ಥಳವಾಗಿ ಶಾಲೆಯು ಅಭಿವೃದ್ಧಿಹೊಂದುತ್ತದೆ. ಅಲ್ಲಿ ವಿದ್ಯಾರ್ಥಿಗಳು ಪರಸ್ಪರರಿಂದ ಕಲಿಯುತ್ತಾರೆ ಮತ್ತು ಸಾಮೂಹಿಕವಾಗಿ ಉತ್ತಮ ಪರ್ಯಾಯಗಳನ್ನು ಕಂಡುಕೊಳ್ಳುತ್ತಾರೆ. ಒಮ್ಮೆ ವಿದ್ಯಾರ್ಥಿಗಳು ವ್ಯಕ್ತಿಗಳು ಹಾಗೂ ಗೆಳೆತನವನ್ನು ಗೌರವಿಸುವುದರ ಮಹತ್ವವನ್ನು ಮತ್ತು ಸ್ವಂತ ಹಾಗೂ ಗುಂಪುಗಳ ದೊಡ್ಡ ಗುರಿಗಳ ಮೇಲೆ ಗಮನ ಕೇಂದ್ರೀಕರಿಸುವುದು ಸೇರಿಕೊಂಡಂತೆ ನಿರ್ದಿಷ್ಟ ಮೌಲ್ಯಗಳನ್ನು ತಿಳಿದುಕೊಂಡು ತರಗತಿಗಳಲ್ಲಿ ಅಳವಡಿಸಲು ಅಭ್ಯಾಸ ಮಾಡಿಕೊಂಡಾಗ ಇದು ಸಾಧ್ಯವಾಗುವುದು.



**ನವೀನ್ ಕುಮಾರ್ ಪಾಸ್ವಾನ್** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗದಲ್ಲಿ ಸಂಶೋಧನಾ ಸಹಾಯಕರಾಗಿದ್ದು, ಸಂವಾದ, ನ್ಯಾಯ ಮತ್ತು ಭ್ರಾತೃತ್ವದಲ್ಲಿ ಆಸಕ್ತಿ ಹೊಂದಿರುವ ಗುಂಪಿನ ಭಾಗವಾಗಿದ್ದಾರೆ. ಇದಕ್ಕೂ ಮುನ್ನ ಅವರು ಪ್ರದಾನ್ ಎಂಬ ಸರ್ಕಾರೇತರ ಸಂಸ್ಥೆಯಲ್ಲಿ ಅಭಿವೃದ್ಧಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸದ್ದಾರೆ. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಶಿಕ್ಷಣಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದು, ತಂಡಗಳ ರಚನೆ ಮತ್ತು ಅಸ್ಮಿತೆ ಕುರಿತ ಸಂಶೋಧನೆಯಲ್ಲಿ ಆಸಕ್ತಿ ಹೊಂದಿದ್ದಾರೆ. ಅವರನ್ನು naveenkumar.paswan@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: **ಶೌಕತ್ ಅಲಿ** | ಪರಿಶೀಲನೆ: **ನಾಗಮಣಿ ಎಸ್.ಎನ್.**